ಹೆದರಿಸಿ, ತಮ್ಮ ಜಾಲದಲ್ಲಿ ಕೆಡಹಿಕೊಳ್ಳುವ ಉಪಾಯವನ್ನು ಮಾಡಿದ್ದಾರೆ, ಉದಾಹರಣೆಗೆ, ಯಾವನೋ ಧೂರ್ತನೊಬ್ಬನು ಯಾರೋ ಮುಗ್ಧರಾದ ಮಾನವರಿಗೆ -"ನಡೆಯಿರಿ, ನಿಮಗೆ ದೇವತಾ ದರ್ಶನಮಾಡಿಸುವೆನು" ಎಂದು ಹೇಳಿದನು. ಯಾವುದೋ ಏಕಾಂತ ಸ್ಥಾನಕ್ಕೆ ಕರೆದೊಯ್ದು, ಒಬ್ಬ ಮನುಷ್ಯನನ್ನು ಚತುರ್ಭುಜನನ್ನಾಗಿ ಮಾಡಿದನು. ಪೊದೆಯಲ್ಲಿ ನಿಲ್ಲಿಸಿ,"ಕಣ್ಣು ಮುಚ್ಚಿಕೊಳ್ಳಿರಿ, ಯಾವಾಗ ನಾನು ಹೇಳುವೆನೋ, ಆಗ ತೆರೆಯಬೇಕು. ಮತ್ತು ಪುನಃ ಯಾವಾಗ ಹೇಳುವೆನೋ, ಆಗಲೇ ಮುಚ್ಚಿಕೊಳ್ಳಬೇಕು. ಯಾವನು ಮುಚ್ಚಿಕೊಳ್ಳುವುದಿಲ್ಲವೋ, ಅವನು ಕುರುಡನಾಗಿ ಹೋಗುವನು" ಎಂದನು. ಯಾವಾಗ ಅವನು ಮುಂದೆ ಬಂದನೋ, ಆಗ- "ನೋಡಿ" ಎಂದನು, ಮತ್ತು ಪುನಃ ಬೇಗನೆ -"ಮುಚ್ಚಿಕೊಳ್ಳಿರಿ" ಎಂದನು. ಯಾವಾಗ ಮತ್ತೆ ಪೊದೆಯಲ್ಲಿ ಹುದುಗಿಕೊಂಡನೋ, ಆಗ -"ತೆರೆಯಿರಿ, ನೋಡಿದಿರಾ ನಾರಾಯಣನನ್ನು? ಎಲ್ಲರೂ ದರ್ಶನಮಾಡಿದರು".- ಎಂದನು. ನಮ್ಮ ಮತವನ್ನು ಒಪ್ಪದವನು ಸೈತಾನನಿಂದ ಭ್ರಾಂತಗೊಳಿಸಲ್ಪಟ್ಟಿದ್ದಾನೆ.- ಈ ಮತವಾದಿಗಳ ಮಾತೂ ಹಾಗೆಯೇ ಸರಿ. ಇಂತಹ ಲೀಲೆ ಈ ಮತವಾದಿಗಳದು. ಆದುದರಿಂದ, ಇವರ ಮಾಯೆಯಲ್ಲಿ ಯಾವನೂ ಸಿಕ್ಕಿಕೊಳ್ಳಬಾರದು. (೧೨೪)

ಯಾವನ ಎದುರಿನಿಂದ ಪೃಥಿವೀ ಮತ್ತು ಆಕಾಶ ಓಡಿಹೋದುವೋ, (ಅವನೇ ಈಶ್ವರನು) ಮತ್ತು ಅವುಗಳಿಗೆ ಸ್ಥಳ ಸಿಕ್ಕಲಿಲ್ಲ, ಮತ್ತು ನಾನು, ಚಿಕ್ಕವರೇನು, ದೊಡ್ಡವರೇನು, ಎಲ್ಲ ಮೃತರೂ ಈಶ್ವರನ ಮುಂದೆ ನಿಂತಿರುವುದನ್ನು ನೋಡಿದೆನು. ಮತ್ತು ಪುಸ್ತಕಗಳು ತೆರೆಯಲ್ಪಟ್ಟವು ಮತ್ತು ಪುಸ್ತಕಗಳಲ್ಲಿ ಬರೆಯಲ್ಪಟ್ಟ ಮಾತುಗಳಿಂದ ಮೃತರ ವಿಚಾರಣೆ ಅವರ ಕರ್ಮಗಳಿಗೆ ಅನುಸಾರ ಮಾಡಲ್ಪಟ್ಟಿತು. (ಯೋ. ಪ್ರ. ಪ:-೨೦ ಆ:- ೧೧,೧೨)

**ಸಮೀಕ್ಷಕ :-** ಬಾಲತನದ ಈ ಮಾತನ್ನು ನೋಡಿರಿ. ಭಲೇ! ಪೃಥಿವೀ ಮತ್ತು ಆಕಾಶ ಹೇಗೆ ಓಡಬಲ್ಲವು? ಮತ್ತು ಅವು ಯಾವುದರ ಮೇಲೆ ನಿಲ್ಲುವುವು? ಯಾವನ ಮುಂದಿನಿಂದ ಓಡಿದವೋ ಅವನ ಸಿಂಹಾಸನ ಎಲ್ಲಿ ನಿಂತಿತು? ಮತ್ತು ಅವನು ಎಲ್ಲಿ ನಿಂತನು? ಮತ್ತು ಶವಗಳು ಪರಮೇಶ್ವರನ ಮುಂದೆ ನಿಲ್ಲಿಸಲ್ಪಟ್ಟವಾದರೆ, ಪರಮೇಶ್ವರನೂ ಕೂಡ ಕುಳಿತೋ ಅಥವಾ ನಿಂತೋ ಇರಬಹುದು. ಪುಸ್ತಕದಲ್ಲಿನ ಲೇಖನಕ್ಕನುಸಾರ ನಡೆಯುತ್ತದೆ- ಎನ್ನಲು ಈಶ್ವರನ ವ್ಯವಹಾರವು ಇಲ್ಲಿನ ನ್ಯಾಯಾಲಯ ಮತ್ತು ಅಂಗಡಿಗಳಿಗೆ ಸಮಾನವಾಗಿರುವುದೇನು? ಮತ್ತು ಸಮಸ್ತ ಜೀವರ ವೃತ್ತಾಂತವನ್ನೂ ಈಶ್ವರನು ಬರೆದನೋ, ಅಥವಾ ಅವನ ಗುಮಾಸ್ತರೋ? ಇಂತಹ ಮಾತುಗಳಿಂದ ಕ್ರೈಸ್ತರೇ ಮೊದಲಾದ ಮತವಾದಿಗಳು ಅನೀಶ್ವರನನ್ನು ಈಶ್ವರನನ್ನಾಗಿಯೂ ಮತ್ತು ಈಶ್ವರನನ್ನು ಅನೀಶ್ವರನನ್ನಾಗಿಯೂ ಮಾಡಿಬಿಟ್ಟಿದ್ದಾರೆ. (೧೨೫)

ಅವರಲ್ಲಿ ಒಬ್ಬನು ನನ್ನ ಬಳಿ ಬಂದನು ಮತ್ತು ನನಗೆ - "ಬಾ. ನಾನು ಮದುಮಗಳನ್ನು, ಎಂದರೆ - ಮೇಕೆಯ ಮರಿಯ ಪತ್ನಿಯನ್ನು ನಿನಗೆ ತೋರಿಸುವೆನು" ಎಂದು ಹೇಳಿದನು. (ಯೋ. ಪ್ರ. ಪ :-೨೧, ಆ:-೯)

**ಸಮೀಕ್ಷಕ :-** ಒಳ್ಳೆಯದೇ ಆಯಿತು. ಏಸು ಸ್ವರ್ಗದಲ್ಲಿ ಮದುಮಗಳನ್ನು ಎಂದರೆ ಪತ್ನಿಯನ್ನು ಸೊಗಸಾಗಿ ಗಳಿಸಿಕೊಂಡನು! ಅಲ್ಲಿ ಸರಸ- ಸಲ್ಲಾಪ ಮಾಡುತ್ತಿರಬಹುದು. ಅಲ್ಲಿಗೆ ತೆರಳುವ ಕ್ರೈಸ್ತರೆಲ್ಲರಿಗೂ ನಾರಿಯರು ಸಿಕ್ಕುತ್ತಿರಬಹುದೋ? ಮತ್ತು ಮಕ್ಕಳು - ಮರಿಗಳೂ ಆಗುತ್ತಿರಬಹುದು. ಹಾಗೂ ಬಹಳ ಗುಂಪು ಕೂಡುವುದರಿಂದ ರೋಗೋತ್ಪತ್ತಿಯಾಗಿ ಸಾಯುತ್ತಲೂ ಇರಬಹುದು. ಇಂತಹ ಸ್ವರ್ಗಕ್ಕೆ ದೂರದಿಂದಲೇ ಕೈಮುಗಿಯುವುದು ಒಳ್ಳೆಯದು. (೧೨೬)

ಮತ್ತು ಅವನು ಆ ನಳಿಗೆಯಿಂದ ನಗರವನ್ನಳೆದನು. ಅದು ಏಳೂವರೆ ನೂರು ಕ್ರೋಶದ್ದಾಗಿದೆ. ಅದರ ಉದ್ದ- ಅಗಲ - ಎತ್ತರ - ಒಂದೇ ಸಮನಾಗಿದೆ - ಎಂದರಿತನು. ಮತ್ತು ಅವನು ಅದರ ಗೋಡೆಯನ್ನು ನರನ - ಎಂದರೆ ದೂತನ ಅಳತೆಯಿಂದ, ೧೪೪ ಮೊಳವಿದೆ - ಎಂದು ತಿಳಿದನು. ಮತ್ತು ಅದರ ಗೋಡೆಯ ಜೋಡಣೆ ಸೂರ್ಯಕಾಂತ ಶಿಲೆಯದಾಗಿದ್ದಿತು. ಮತ್ತು ಶುದ್ಧ ಸ್ವರ್ಣದ್ದಾಗಿದ್ದಿತು. ನಿರ್ಮಲವಾದ ಗಾಜಿಗೆ ಸಮಾನವಾಗಿತ್ತು. ಮತ್ತು ನಗರದ ಗೋಡೆಯ ತಳಪಾಯಗಳು ಒಂದೊಂದು ಕೂಡ ಬಹುಮೂಲ್ಯವಾದ ಕಲ್ಲಿನಿಂದ ಸಿಂಗರಿಸಲ್ಪಟ್ಟಿದ್ದುವು. ತಳಹದಿ ಸೂರ್ಯಕಾಂತ ಶಿಲೆಯೂ, ಎರಡನೆಯದು ನೀಲಮಣಿಯದೂ ಮೂರನೆಯದು ಕೆಂಪು ಕಲ್ಲಿನದೂ, ನಾಲ್ಕನೆಯದು ಮರಕಶಿಲೆಯದೂ, ಐದನೆಯದು ಗೋಮೇಧಿಕಶಿಲೆಯದೂ, ಆರನೆಯದು ಮಾಣಿಕ್ಯದ್ದೂ, ಏಳನೆಯದು ಪೀತಮಣಿಯದೂ, ಎಂಟನೆಯದು ಪಚ್ಚೆಯದೂ, ಒಂಬತ್ತನೆಯದು ಪುಷ್ಪರಾಗಶಿಲೆಯದೂ, ಹತ್ತನೆಯದು ಬೂದುಶಿಲೆಯದೂ, ಹನ್ನೊಂದನೆಯದು ಧೂಮ್ರಕಾಂತಶಿಲೆಯದೂ, ಹನ್ನೆರಡನೆಯದು ನೀಲಸ್ಫಟಿಕಮಣಿಯದೂ ಮತ್ತು ಹನ್ನೆರಡು ಹೆಬ್ಬಾಗಿಲುಗಳು ಹನ್ನೆರಡು ಮುತ್ತುಗಳದೂ ಆಗಿದ್ದುವು. ಒಂದೊಂದು ಮುತ್ತಿನಿಂದ ಒಂದೊಂದು ಹೆಬ್ಬಾಗಿಲು ಆಗಿದ್ದಿತು. ಮತ್ತು ನಗರದ ಬೀದಿಗಳು ಸ್ವಚ್ಛವಾದ ಗಾಜಿನಂತಹ, ನಿರ್ಮಲವಾದ ಚಿನ್ನದವಾಗಿದ್ದುವು. (ಯೋ. ಪ. ಪ:- ೨೧. ಆ: ೧೬-೨೧)

**ಸಮೀಕ್ಷಕ :-** ಕೇಳಿರಿ ಕ್ರೈಸ್ತರ ಸ್ವರ್ಗದ ವರ್ಣನೆಯನ್ನು ಕ್ರೈಸ್ತರು ಸಾಯುತ್ತಾ ಹೋಗುತ್ತಾರೆಯಾದರೆ ಮತ್ತು ಜನಿಸುತ್ತಾ ಹೋಗುತ್ತಾರೆಯಾದರೆ, ಇಷ್ಟು ವಿಸ್ತಾರದ ನಗರದಲ್ಲಿ ಹೇಗೆ ಹಿಡಿಸಬಲ್ಲರು? ಏಕೆಂದರೆ, ಅದರಲ್ಲಿ ಮಾನವರ ಆಗಮನವೇನೋ ಆಗುತ್ತದೆ; ಆದರೆ, ಅದರಿಂದ ನಿರ್ಗಮನವಿಲ್ಲ. ಮತ್ತು ಅದು ಬಹುಮೂಲ್ಯರತ್ನಗಳಿಂದ ಜಟಿತವಾದ ನಗರಿ- ಎಂದೊಪ್ಪಿ, ಅದೆಲ್ಲವೂ

ಚಿನ್ನದ್ದು-ಎಂದು ಮೊದಲಾಗಿ ಬರೆದಿರುವುದು ಕೇವಲ ಮುಗ್ಧಮಾನವರನ್ನು ಭ್ರಾಂತಗೊಳಿಸಿ, ಸಿಕ್ಕಿಸಿಕೊಳ್ಳುವ ಲೀಲೆಯಾಗಿದೆ. ಒಳ್ಳೆಯದು ಆ ನಗರದ ಉದ್ದ-ಅಗಲಗಳೇನೋ ಬರೆದಂತಿರುವುದು ಶಕ್ಯ; ಆದರೆ-ಎತ್ತರ ೭೫೦ ಕ್ರೋಶ ಹೇಗೆ ತಾನೇ ಆಗಬಲ್ಲದು? ಇದು ಸರ್ವಥಾ ಮಿಥ್ಯಾ ಕಪೋಲ ಕಲ್ಪನೆ. ಮತ್ತು ಇಷ್ಟು ದೊಡ್ಡ ಮುತ್ತುಗಳು ಎಲ್ಲಿಂದ ಬಂದಿರಬಹುದು? ಈ ಲೇಖನವನ್ನು ಬರೆಯುವವನ ಮನೆಯ ಗಡಿಗೆಯೊಳಗಿನಿಂದಲೋ? ಈ ಹರಟೆ ಪುರಾಣಕ್ಕೂ ಅಪ್ಪನಾಗಿದೆ (೧೨೭)

ಮತ್ತು ಯಾವುದಾದರೂ ಅಪವಿತ್ರ ವಸ್ತುವನ್ನು ಅಥವಾ ಘೃಣಿತಕರ್ಮವನ್ನು ಮಾಡುವವನು, ಇಲ್ಲವೇ ಅಸತ್ಯವ್ಯವಹಾರ ಮಾಡುವವನು ಅದರಲ್ಲಿ ಯಾವುದೇ ರೀತಿಯಿಂದ ಪ್ರವೇಶಿಸಲಾರನು. (ಯೋ. ಪ್ರ.ಪ:-೨೦ ಆ:-೨೭)

**ಸಮೀಕ್ಷಕ :-** ವಿಷಯ ಹೀಗಿರುವುದಾದರೆ, ಕ್ರೈಸ್ತರುಗಳು- "ಪಾಪಿ ಜನರೂ ಕೂಡ ಕ್ರೈಸ್ತರಾಗುವುದರಿಂದ ಸ್ವರ್ಗಕ್ಕೆ ಹೋಗಬಲ್ಲರು?" - ಎಂದೇಕೆ ಹೇಳುತ್ತಾರೆ? ಈ ಮಾತು ಸರಿಯಾದುದಲ್ಲ. ಹೀಗಿರುವುದಾದರೆ, ಸ್ವಪ್ನದ ಸುಳ್ಳು ಮಾತುಗಳನ್ನಾಡುವವನಾದ ಜೋನನು ಸ್ವರ್ಗದಲ್ಲಿ ಪ್ರವೇಶಮಾಡಲು ಎಂದಿಗೂ ಶಕ್ತನಾಗಿರಲಾರನು. ಮತ್ತು ಏಸುವು ಕೂಡ ಸ್ವರ್ಗಕ್ಕೆ ಹೋಗಿರಲಾರನು. ಏಕೆಂದರೆ ಒಬ್ಬನೇ ಪಾಪಿಯೂ ಸ್ವರ್ಗಕ್ಕೆ ಹೋಗಲಾರನು ಎಂದಮೇಲೆ, ಅನೇಕ ಪಾಪಿಗಳ ಪಾಪದ ಭಾರದಿಂದ ಯುಕ್ತನಾಗಿರುವವನು ಹೇಗೆ ತಾನೇ ಸ್ವರ್ಗವಾಸಿಯಾಗಬಲ್ಲನು? (೧೨೮)

ಮತ್ತು ಈಗ ಯಾವ ಶಾಪವೂ ಇರುವುದಿಲ್ಲ ಮತ್ತು ಈಶ್ವರನ ಮತ್ತು ಮೇಕೆಯ ಮರಿಯ ಸಿಂಹಾಸನ ಅದರಲ್ಲಿರುವುದು ಮತ್ತು ಅವನ ದಾಸರು ಅವನಿಗೆ ಸೇವೆ ಮಾಡುವರು ಮತ್ತು ಅವನ ಮುಖವನ್ನು ನೋಡುವರು ಮತ್ತು ಅವನ ಹೆಸರು ಅವನ ಹಣೆಯ ಮೇಲೆ ಇರುವುದು ಮತ್ತು ಅಲ್ಲಿ ರಾತ್ರಿಯಾಗುವುದಿಲ್ಲ ಮತ್ತು ಅವರಿಗೆ ದೀಪದ ಅಥವಾ ಸೂರ್ಯನ ಜ್ಯೋತಿಯ ಅವಶ್ಯಕತೆಯಿಲ್ಲ. ಏಕೆಂದರೆ, ಪರಮೇಶ್ವರ ಈಶ್ವರನು ಅವರಿಗೆ ಬೆಳಕನ್ನು ಕೊಡುವನು. ಅವರು ಸದಾ- ಸರ್ವದಾ ರಾಜ್ಯವನ್ನಾಳುವರು. (ಯೋ. ಪ್ರ.ಪ:-೨೨ ಆ:-೩-೫)

**ಸಮೀಕ್ಷಕ :-** ನೋಡಿರಿ, ಇದೇ ಕ್ರೈಸ್ತರ ಸ್ವರ್ಗವಾಸ! ಈಶ್ವರನು ಮತ್ತು ಏಸುವು ಸಿಂಹಾಸನದ ಮೇಲೆ ನಿರಂತರವಾಗಿ ಕುಳಿತಿರುವರೇನು? ಮತ್ತು ಅವರ ದಾಸರು ಅವರ ಮುಂದೆ ಸದಾ ಮುಖವನ್ನು ನೋಡುತ್ತಾ ಇರುವರೇ? ಆಗ ಇದನ್ನಾದರೂ ಹೇಳಿರಿ. ನಿಮ್ಮ ಈಶ್ವರನ ಮುಖ ಐರೋಪ್ಯರದರಂತೆ ಬೆಳ್ಳಗಾಗಿದೆಯೋ? ಅಥವಾ ಆಫ್ರಿಕನ್ನರದರ ಹಾಗೆ ಕಪ್ಪಾಗಿದೆಯೋ? ಇಲ್ಲವೇ ಬೇರೆಯ ದೇಶದವರದಂತೆಯಿದೆಯೋ? ನಿಮ್ಮ ಈ ಸ್ವರ್ಗವೂ ಬಂಧನವೇ! ಕಿರಿಮೆ-ಹಿರಿಮೆಗಳಿರುವಲ್ಲಿ ಹಾಗೂ ಅದೊಂದೇ ನಗರದಲ್ಲಿರಬೇಕಾದ ಆವಶ್ಯಕತೆ ಇರುವಲ್ಲಿ ದುಃಖವಾಗದೇ ಇರುವುದಾದರೂ ಹೇಗೆ? ಮತ್ತು ಮುಖವುಳ್ಳವನು (ಸಾಕಾರನು) ಈಶ್ವರನೂ, ಸರ್ವಜ್ಞನೂ, ಪರಮೇಶ್ವರನೂ ಎಂದಿಗೂ ಆಗಲಾರನು. (೧೨೯)

ನೋಡು, ನಾನು ಬೇಗ ಬರುತ್ತೇನೆ. ಪ್ರತಿಯೊಬ್ಬನಿಗೂ ಅವನ ಕಾರ್ಯಕ್ಕೆ ಅನುರೂಪವಾಗಿ ಫಲಗಳನ್ನು ಕೊಡುವ ಸಲುವಾಗಿ ನನ್ನ (ಹತ್ತಿರ) ಪ್ರತಿಫಲಗಳು ನನ್ನ ಸಂಗಡವೇ ಇವೆ. ( ಯೋ. ಪ್ರ. ಪ:-೨೨ ಆ:-೧೨)

**ಸಮೀಕ್ಷಕ :-** ಕರ್ಮಾನುಸಾರವಾಗಿ ಫಲಗಳನ್ನು ಪಡೆಯುತ್ತಾರೆ - ಎನ್ನುವುದೇ ಸಿದ್ಧಾಂತವಾಗಿರುವಾಗ, ಪಾಪಗಳ ಕ್ಷಮೆ ಎಂದಿಗೂ ಆಗುವುದಿಲ್ಲ. ಮತ್ತು ಕ್ಷಮೆಯಾಗುವುದಾದರೆ, ಇಂಜೀಲಿನ ಮಾತುಗಳು ಸುಳ್ಳು. ಯಾವನಾದರೂ -"ಕ್ಷಮೆ ಮಾಡುವುದನ್ನೂ ಇಂಜೀಲಿನಲ್ಲಿ ಬರೆದಿದೆ" ಎಂದು ಹೇಳುವನಾದರೆ, ಪೂರ್ವಾಪರ ವಿರುದ್ಧ ಎಂದರೆ ಪದತೋವ್ಯಾಘಾತವಾಯಿತು; ಸುಳ್ಳೂ ಆಯಿತು. ಇದನ್ನು ಒಪ್ಪುವುದನ್ನು ಬಿಟ್ಟು ಬಿಡಿರಿ.

ಇನ್ನು ಎಲ್ಲಿಯವರೆಗೆ ಬರೆಯೋಣ? ಇವರ ಬೈಬಲ್‌ನಲ್ಲಿ ಲಕ್ಷಾಂತರ ಖಂಡನೀಯವಾದ ಮಾತುಗಳಿವೆ. ಹೀಗೆ ಏನೋ ಸ್ವಲ್ಪ ಸಂಕೇತಮಾತ್ರವಾಗಿ, ಕ್ರೈಸ್ತರ ಬೈಬಲ್ ಗ್ರಂಥವನ್ನು ತೋರಿಸಿದ್ದೇವೆ. ಇಷ್ಟರಿಂದಲೇ ಬುದ್ಧಿವಂತರಾದ ಜನರು ಬಹಳ ತಿಳಿದುಕೊಳ್ಳುವರು. ಸ್ವಲ್ಪ ಮಾತುಗಳನ್ನುಳಿದು, ಉಳಿದುದೆಲ್ಲಾ ಸುಳ್ಳೇ ತುಂಬಿಕೊಂಡಿದೆ. **ಅಸತ್ಯದ ಸಂಗದಿಂದ ಸತ್ಯವೂ ಕೂಡ ಶುದ್ಧವಾಗಿ ಉಳಿಯದು.** ಹಾಗೆಯೇ ಬೈಬಲ್ ಗ್ರಂಥವೂ ಕೂಡ ಮಾನನೀಯವಾಗಲಾರದು. ಆದರೆ - (ಬೈಬಲಿನಲ್ಲಿರುವ) ಸತ್ಯ, ವೇದಗಳ ಸ್ವೀಕೃತಿಯಲ್ಲಿ ಗೃಹೀತವಾಗಿಯೇ ಆಗುತ್ತದೆ. (೧೩೦)

ಇತಿ ಶ್ರೀಮದ್ದಯಾನಂದ ಸರಸ್ವತೀ ಸ್ವಾಮಿನಿರ್ಮಿತೇ ಸತ್ಯಾರ್ಥಪ್ರಕಾಶೇ

ಸುಭಾಷಾವಿಭೂಷಿತೇ ಕೃಶ್ಚೀನಮತವಿಷಯೇ

ತ್ರಯೋದಶ ಸಮುಲ್ಲಾಸಃ ಸಂಪೂರ್ಣಃ

----